ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಚುನಾವಣಾ ಅಕ್ರಮಗಳಲ್ಲಿ ಭಾಗಿಯಾಗಿರುವ ಪೊಲೀಸ್‌ರ ವಿರುದ್ಧ ಜರುಗಿಸಿರುವ ಕ್ರಮಗಳ ಬಗ್ಗೆ

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) :-

787 (725) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2019ರ ವಿಧಾನಸಭಾ ಉಪಚುನಾವಣೆಯ ಅಕ್ರಮಗಳಲ್ಲಿ ಪೊಲೀಸ್ ಇಲಾಖೆಯ ನೌಕರರು ಭಾಗಿಯಾಗಿರುವುದು ನಿಜವೇ; ಇದ್ದಲ್ಲಿ, ಅವರ ಹೆಸರು, ಹುದ್ದೆವಾರು ವಿವರ ನೀಡುವುದು ;

(ಆ) ಯಶವಂತಪುರ ವಿಧಾನಸಭಾ ಕ್ಷೇತ್ರದ ಉಪಚುನಾವಣೆಯ ಅಕ್ರಮಗಳಲ್ಲಿ ಪೊಲೀಸ್ ಇಲಾಖೆಯ ಪೇದೆ ಮತ್ತು ಮುಖ್ಯಪೇದೆಗಳು ಭಾಗಿಯಾಗಿರುವುದು ನಿಜವೇ ; ಇದ್ದಲ್ಲಿ, ಅವರ ಹೆಸರು, ಹುದ್ದೆ ಹಾಗೂ ಆ ಸಮಯದಲ್ಲಿ ಅವರು ಕೆಲಸ ಮಾಡುತ್ತಿದ್ದ ಇಲಾಖಾವಾರು ವಿವರ ಮತ್ತು ಎಷ್ಟು ವರ್ಷಗಳಿಂದ ಆ ಇಲಾಖೆಯ ಯಾವ ಹುದ್ದೆಯಲ್ಲಿ ಕೆಲಸ ಮಾಡುತ್ತಿದ್ದಾರೆ ಎಂಬ ವಿವರ ನೀಡುವುದು ;

(ಇ) ಸದರಿಯವರು ಅಕ್ರಮಗಳಲ್ಲಿ ಭಾಗಿಯಾಗಿರುವ ಬಗ್ಗೆ ದೂರು ನೀಡಿರುವವರು ಯಾರು ಮತ್ತು ದೂರಿನ ಪ್ರತಿ ನೀಡುವುದು ;

(ಈ) ಸದರಿಯವರ ವಿರುದ್ಧ ಚುನಾವಣಾ ಆಯೋಗ ಮತ್ತು ಪೊಲೀಸ್ ಆಯುಕ್ತರ ಕಛೇರಿಯಲ್ಲಿ ದೂರು ದಾಖಲಾಗಿರುವುದು ನಿಜವೇ; ಇದ್ದಲ್ಲಿ, ಚುನಾವಣಾ ಆಯೋಗ ಇವರುಗಳ ವಿರುದ್ಧ ಮಾಡಿರುವ ಶಿಫಾರಸ್ಸು ಮತ್ತು ಪೊಲೀಸ್ ಇಲಾಖೆ ಕೈಗೊಂಡಿರುವ ಕ್ರಮಗಳ ವಿವರ ನೀಡುವುದು ;

(ಉ) ಸದರಿ ಪೊಲೀಸರು ಪೊಲೀಸ್ ಇಲಾಖೆಯಲ್ಲಿ ನೇಮಕಾತಿಯಾದ ಹುದ್ದೆಗೆ ತಕ್ಕಂತೆ ಕೆಲಸ ನಿರ್ವಹಿಸಲು ನ್ಯಾಯ ಒದಗಿಸದೇ ಬೇರೆ ಇಲಾಖೆಗಳಿಗೆ ಎರವಲು ಸೇವೆ ಮೇಲೆ ಕರ್ತವ್ಯ ನಿರ್ವಹಿಸದಂತೆ ತಡೆಗಟ್ಟಲು ಪೊಲೀಸ್ ಇಲಾಖೆ ಕೈಗೊಳ್ಳುವ ಕ್ರಮಗಳೇನು ? (ವಿವರ ಒದಗಿಸುವುದು)